


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1608 (1821)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಶಿಕ್ಷಣ ಇಲಾಖೆಯ ಬೋಧಕೇತರ ಸಿಬ್ಬಂದಿ ಮುಂಬಡ್ತಿಯಲ್ಲಿ ಸುಳ್ಳು ಮಾಹಿತಿ ನೀಡಿರುವ ಬಗ್ಗೆ

(ಅ) ರಾಜ್ಯದ ಬೆಂಗಳೂರು, ಮೈಸೂರು, ಧಾರವಾಡ ಮತ್ತು ಕಲಬುರಗಿಯ ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಬೋಧಕೇತರ ಸಿಬ್ಬಂದಿ (ಡಿ.ಡಿ.ಪಿ.ಐ., ಎಫ್.ಡಿ.ಸಿ. ಮತ್ತು ಎಸ್.ಡಿ.ಸಿ.) ಹಂತದ ಹುದ್ದೆಗಳ ಮುಂಬಡ್ತಿಗೆ ಅರ್ಹರಲ್ಲದಿದ್ದರೂ ಸುಳ್ಳು ಮಾಹಿತಿ ದಾಖಲೆಗಳನ್ನು ಒದಗಿಸಿ ಮುಂಬಡ್ತಿ ಪಡೆದು ಕೆಲಸ ನಿರ್ವಹಿಸುತ್ತಿರುವವರ ವಿರುದ್ಧ ಕ್ರಿಮಿನಲ್ ಕೇಸ್ ದಾಖಲು ಮಾಡಲು ಸರ್ಕಾರವು ಆದೇಶ ಮಾಡಿರುವುದು ನಿಜವೇ; ಸದರಿ ಆದೇಶದ ಪ್ರತಿ ನೀಡುವುದು;

(ಆ) ಈ ಆದೇಶದಂತೆ ಕೇಸ್ ಹಾಕಲಾಗಿದೆಯೇ; ಇಲ್ಲದಿದ್ದಲ್ಲಿ ಕಾರಣ ಏನು? (ಅಂತಹ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿಳಾಸವಾರು ಮಾಹಿತಿ ಒದಗಿಸುವುದು)